R.N.I. No. KARBIL/2001/47147
POSTAL REGISTRATION
No. RNP/KA/BGS/2202/2014-16

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜನವರಿ ೨೩, ೨೦೧೪ (ಮಾಘ ೩, ಶಕ ವರ್ಷ ೧೯೩೫)<br>Bangalore, Thursday, January 23, 2014 (Magha 3, Shaka Varsha 1935) | ಸಂಚಿಕೆ ೪<br>Issue 4 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರ ನಡವಳಿಗಳು

**ನಿಯಂತ್ರಕರ ಕಛೇರಿ, ರಾಜ್ಯಲೆಕ್ಕಪತ್ರ ಇಲಾಖೆ, ಬೆಂಗಳೂರು ಜಲ ಮಂಡಳಿ ಕಟ್ಟಡ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು-560 009.**

**ವಿಷಯ:** ಶ್ರೀಮತಿ ರೀಮು ಎಸ್. ಪಾಟೀಲ, ಕಿರಿಯ ಲೆಕ್ಕ ಸಹಾಯಕರು ಇವರನ್ನು ಅನಧಿಕೃತ ಗೈರು ಹಾಜರಿ ನಿಮಿತ್ತ ಸರ್ಕಾರಿ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಉಲ್ಲೇಖ:**
1 ಈ ಕಚೇರಿ ತಿಳುವಳಿಕೆ ಪತ್ರ ಸಂಖ್ಯೆ:ರಾಲೆಪ 1 ಸಿಅರ/2008/85 ದಿನಾಂಕ: 30-04-2009.
2 ಸರ್ಕಾರಕ್ಕೆ ಬರೆದಿರುವ ಪತ್ರ ಸಂಖ್ಯೆ:ರಾಲೆಪ 1 ಸಿಅರ/2008/3972 ದಿನಾಂಕ: 27-12-2008.
3 ಸರ್ಕಾರದ ಪತ್ರ ಸಂಖ್ಯೆ:ಆಇ 23 ರಾಲೆಪ/09 ದಿನಾಂಕ: 09-04-2009.
4 ಈ ಕಚೇರಿ 2ನೇ ತಿಳುವಳಿಕೆ ಪತ್ರ ದಿನಾಂಕ:20-05-2009.
5 ಈ ಕಚೇರಿ ಕಾರಣ ಕೇಳುವ ನೋಟೀಸು ಮತ್ತು ದೋಷಾರೋಪಣ ಪಟ್ಟಿ ದಿನಾಂಕ: 24-09-2010.
6 ದಿನ ಪತ್ರಿಕೆಗಳಲ್ಲಿ ಪ್ರಕಟಣೆ ದಿನಾಂಕ: 19-06-2011.
7 ಶ್ರೀಮತಿಯವರ ಮನವಿ ರಜಾ ಅರ್ಜಿ ದಿನಾಂಕ: 28-06-2011.
8 ಸರ್ಕಾರದ ಪತ್ರ ಸಂಖ್ಯೆ:ಆಇ 356 ರಾಲೆಪ/2011, ದಿನಾಂಕ: 25-01-2012.
9 ಈ ಕಚೇರಿ ನಡವಳಿ ಸಂಖ್ಯೆ: ರಾಲೆಪ 16 ಸಿದ್ವಿನೇ/2007-11, ದಿನಾಂಕ: 20-04-2012.
10 ವಿಚಾರಣಾ ವರದಿ ದಿನಾಂಕ: 17-09-2012.
11 ಈ ಕಚೇರಿ ಪತ್ರ ಸಂಖ್ಯೆ: ರಾಲೆಪ 16 ಸಿದ್ವಿನೇ/2007-12, ದಿನಾಂಕ: 08-11-2012.

ಶ್ರೀಮತಿ ರೀಮು ಎಸ್ ಪಾಟೀಲ, ಇವರು ಅನುಕಂಪದ ಆಧಾರದ ಮೇಲೆ ಕಿರಿಯ ಲೆಕ್ಕ ಸಹಾಯಕರಾಗಿ ದಿನಾಂಕ: 01-02-2008ರಿಂದ ರಾಜ್ಯ ಲೆಕ್ಕಪತ್ರ ಇಲಾಖೆಯ ಕೇಂದ್ರ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ, ಇವರು ದಿನಾಂಕ: 24-11-2008ರಂದು ಸಲ್ಲಿಸಿದ ಮನವಿಯಲ್ಲಿ ಸ್ವಿಡ್ಜರ್‌ಲ್ಯಾಂಡ್ ವಿಳಾಸ ಹಾಗೂ ನಿಗದಿತ ನಮೂನೆಯ ರಜೆ ಅರ್ಜಿಯಲ್ಲಿ ಭಾರತದ ವಿಳಾಸವನ್ನು ನೀಡಿ ಅವರ ವಿವಾಹವು ದಿನಾಂಕ: 07-12-2008ರಂದು ಸ್ವಿಡ್ಜರ್‌ಲ್ಯಾಂಡ್ ನಿವಾಸಿಯೊಂದಿಗೆ ನಡೆಯಲಿರುವುದಾಗಿ ತಿಳಿಸಿ ದಿನಾಂಕ: 29-11-2008ರಿಂದ ದಿನಾಂಕ: 19-03-2009ರವರೆಗೆ ಗಳಿಕೆ ರಜೆ ಹಾಗೂ ಅಸಾಧಾರಣ ರಜೆ ಮಂಜೂರು ಮಾಡುವಂತೆ ಹಾಗೂ ಹೊರ ದೇಶಕ್ಕೆ ಹೋಗಲು ಅನುಮತಿ ಹಾಗೂ ನಿರಾಕ್ಷೇಪಣ ಪತ್ರ ನೀಡುವಂತೆ ಕೋರಿದ್ದರು. ಶ್ರೀಮತಿಯವರಿಗೆ ಸ್ವಿಡ್ಜರ್‌ಲ್ಯಾಂಡ್‌ಗೆ ವಿದೇಶ ಪ್ರವಾಸ ಮಾಡಲು ಅನುಮತಿ ನೀಡುವಂತೆ ದಿನಾಂಕ: 27-12-2008ರಲ್ಲಿ ಸರ್ಕಾರಕ್ಕೆ ಪತ್ರ ಬರೆಯಲಾಗಿತ್ತು. ಸರ್ಕಾರದಿಂದ ಅನುಮತಿ ನೀಡುವ ಮೊದಲೇ ಶ್ರೀಮತಿಯವರು ಇಲಾಖಾ ಅನುಮತಿ ಪಡೆಯದೆ ದಿನಾಂಕ: 29-11-2008ರಿಂದ ಕೆಲಸಕ್ಕೆ ಗೈರು ಹಾಜರಾಗಿರುತ್ತಾರೆ. ಶ್ರೀಮತಿಯವರಿಗೆ ಈ ಕಚೇರಿ ಪತ್ರ ದಿನಾಂಕ: 30-04-2009ರಲ್ಲಿ ಅವರ ರಜೆ ಅವಧಿ ದಿನಾಂಕ: 19-03-2009ಕ್ಕೆ ಮುಗಿದಿರುವುದರಿಂದ ಕೂಡಲೆ ಕರ್ತವ್ಯಕ್ಕೆ ಹಾಜರಾಗುವಂತೆಯು, ತಪ್ಪಿದ್ದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದೆಂದು ತಿಳುವಳಿಕೆ ಪತ್ರವನ್ನು ಅವರ ಭಾರತದ ವಿಳಾಸಕ್ಕೆ ಕಳುಹಿಸಲಾಗಿದ್ದು, ಸದರಿ ತಿಳುವಳಿಕೆ ಪತ್ರವು "Addresse Not Found" ಎಂದು ಹಿಂದಿರುಗಿ ಬಂದಿರುತ್ತದೆ. ಪುನಃ ದಿನಾಂಕ: 18-05-2009ರಲ್ಲಿ ಅವರ ಅನಧಿಕೃತ ಗೈರು ಹಾಜರಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 106-ಎರಡಿ ಅನಧಿಕೃತ ಗೈರು ಹಾಜರಿ ಎಂದು ಏಕೆ ಪರಿಗಣಿಸಬಾರದು ಎಂಬ ಬಗ್ಗೆ ಸೂಕ್ತ ಸಮಜಾಯಿಷಿಯನ್ನು ನೀಡಲು ಹಾಗೂ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಸಿ

ತಪ್ಪಿದ್ದಲ್ಲಿ ಅವರ ವಿರುದ್ಧ ಶಿಸ್ತು ಕ್ರಮವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ಕ್ರಮ ಕೈಗೊಳ್ಳಲಾಗುವುದೆಂದು ತಿಳುವಳಿಕೆ ಪತ್ರವನ್ನು ಅವರ ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೆ ಕಳುಹಿಸಲಾಗಿ ಸದರಿ ತಿಳುವಳಿಕೆ ಪತ್ರ ಸ್ವೀಕೃತಗೊಳ್ಳದೆ ವಾಪಸ್ಸು ಬಂದಿರುತ್ತದೆ.

ಸರ್ಕಾರದ ದಿನಾಂಕ: 09–04–2009ರ ಪತ್ರದಲ್ಲಿ ಶ್ರೀಮತಿಯವರ ವಿದೇಶ ಪ್ರವಾಸದ ಅವಧಿ ಮುಗಿದಿರುವುದರಿಂದ ಅವರು ಪ್ರವಾಸದಿಂದ ಹಿಂದಿರುಗಿದ್ದಾರೆಯೇ ಎಂಬ ಬಗ್ಗೆ ಮಾಹಿತಿ ನೀಡುವಂತೆ ಕೋರಿದ್ದು, ಈ ಕಚೇರಿ ದಿನಾಂಕ: 08–05–2009ರ ಪತ್ರದಲ್ಲಿ ಅವರು ವಿದೇಶದಿಂದ ಹಿಂದಿರುಗದೆ ಹಾಗೂ ಕರ್ತವ್ಯಕ್ಕೆ ಹಾಜರಾಗದೆ ಇರುವ ಬಗ್ಗೆ ಸರ್ಕಾರಕ್ಕೆ ಮಾಹಿತಿ ನೀಡಲಾಗಿದೆ.

ಶ್ರೀಮತಿಯವರ ಅನಧಿಕೃತ ಗೈರು ಹಾಜರಿ ಬಗ್ಗೆ ದಿನಾಂಕ: 24–09–2010ರಲ್ಲಿ ಶಿಸ್ತಿನ ಕ್ರಮವಾಗಿ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ (ನಡತೆ) ನಿಯಮಗಳು 1966ರ ನಿಯಮ 3ರನ್ವಯ ದುರ್ನಡತೆ ಎಂದು ಪರಿಗಣಿಸಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳನ್ವಯ ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಉದ್ದೇಶಿಸಿ ದೋಷಾರೋಪಣ ಪಟ್ಟಿ ಮತ್ತು ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ವಿವರಣೆ ನೀಡಲು ಮತ್ತು ಯಾವುದೇ ವಿವರಣೆ ಬಾರದಿದ್ದಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಲಾಗುವುದೆಂದು ಸೂಚನೆ ನೀಡಲಾದ ಪತ್ರಗಳನ್ನು ಅವರ ಭಾರತದ ವಿಳಾಸದ ಹಾಗೂ ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೆ ಕಳುಹಿಸಲಾಗಿ, ಭಾರತದ ವಿಳಾಸದ ಪತ್ರ ಶ್ರೀಮತಿಯವರ ಪರವಾಗಿ ಸ್ವೀಕೃತಗೊಂಡು ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೆ ಕಳುಹಿಸಲಾದ ಪತ್ರ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿದ ಕಾರಣ ಈ ಬಗ್ಗೆ ಅಂಚೆ ಇಲಾಖೆಗೆ ಪತ್ರ ಬರೆದು ಮಾಹಿತಿ ನೀಡುವಂತೆ ಕೋರಲಾಯಿತು. ಅಂಚೆ ಇಲಾಖೆಯ ದಿನಾಂಕ: 19–05–2011ರ ಪತ್ರದಲ್ಲಿ "Article was not claimed hence returned by swiss post" ಎಂದು ಮಾಹಿತಿ ನೀಡಿದೆ.

ಶ್ರೀಮತಿಯವರ ರಜೆ ಅವಧಿ ದಿನಾಂಕ: 19–03–2009ಕ್ಕೆ ಮುಗಿದ ನಂತರ ಅನಧಿಕೃತ ಗೈರು ಹಾಜರಿಯಿಂದ ಕಚೇರಿ ಕೆಲಸಗಳಿಗೆ ಅಡಚಣೆ ಉಂಟಾಗಿರುತ್ತದೆ, ಅವರ ವರ್ತನೆಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3ಕ್ಕೆ ವಿರುದ್ಧವಾಗಿದ್ದು, ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿದ್ದರಿಂದ, ಈ ಕಚೇರಿಯ ದಿನಾಂಕ: 18–05–2009ರ ತಿಳುವಳಿಕೆ ಪತ್ರ ಹಾಗೂ ದಿನಾಂಕ: 24–09–2010ರ ಕಾರಣ ಕೇಳುವ ನೋಟೀಸುಗಳನ್ನು ಅವರ ಭಾರತದ ವಿಳಾಸಕ್ಕೆ ಹಾಗೂ ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೆ ಕಳುಹಿಸಲಾಗಿದ್ದು, ಭಾರತದ ವಿಳಾಸದ ಪತ್ರಗಳು ಅವರ ಪರವಾಗಿ ಶ್ರೀಮತಿ ಎಂ. ಎಸ್. ಸ್ವರ್ಣರವರಿಂದ ಸ್ವೀಕೃತಗೊಂಡು ಅಂಚೆ ಸ್ವೀಕೃತಿ ಪತ್ರ ಬಂದಿರುತ್ತದೆ. ಈ ಕಚೇರಿಯ ಪತ್ರಗಳಿಗೆ ಯಾವುದೇ ವಿವರಣೆ ನೀಡದೆ ಕರ್ತವ್ಯಕ್ಕೂ ಸಹ ಹಾಜರಾಗಿರದ ಕಾರಣ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿದ್ದು, ದಿನಾಂಕ: 19–06–2011ರ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಗೊಂಡಿರುತ್ತದೆ.

ಶ್ರೀಮತಿಯವರು ದಿನಾಂಕ: 29–06–2011ರ ಮನವಿಯಲ್ಲಿ ಅವರು ವಿವಾಹದ ನಂತರ ಪತಿಯೊಡನೆ ಸ್ವಿಡ್ಜರ್‌ಲ್ಯಾಂಡ್‌ಗೆ ಹೋಗುವ ಸಲುವಾಗಿ ದಿನಾಂಕ:29–11–2008ರಿಂದ ದಿನಾಂಕ: 19–03–2009ರವರೆಗೆ ರಜೆ ಮಂಜೂರು ಮಾಡುವಂತೆ ದಿನಾಂಕ: 24–11–2008ರ ಮನವಿಯಲ್ಲಿ ಕೋರಿದ್ದು, ಆದರೆ ಕಾರಣಾಂತರಗಳಿಂದ ಭಾರತಕ್ಕೆ ಮರಳಿ ಬರಲಾಗದ ಕಾರಣ ಮತ್ತು ಸಮಯಕ್ಕೆ ಸರಿಯಾಗಿ ರಜೆಯನ್ನು ಮುಂದುವರೆಸಿ ರಜೆ ಅರ್ಜಿ ಕಳುಹಿಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ ದಿನಾಂಕ: 20–08–2009ರಿಂದ 27–06–2011ರವರೆಗೂ ನಂತರ ದಿನಾಂಕ: 28–06–2011 ರಿಂದ 29–09–2011ರವರೆಗೂ ಅಸಾಧಾರಣ ರಜೆ ಮಂಜೂರು ಮಾಡುವಂತೆ ಕೋರಿ ರಜೆ ಅರ್ಜಿಯನ್ನು ಕಳುಹಿಸಿರುತ್ತಾರೆ. ತದನಂತರವೂ ಕರ್ತವ್ಯಕ್ಕೆ ಮರಳಿ ಬಂದಿರುವುದಿಲ್ಲ.

ಶ್ರೀಮತಿಯವರ ಅನಧಿಕೃತ ಗೈರು ಹಾಜರಾತಿ ಕುರಿತು ತೆಗೆದುಕೊಂಡ ಕ್ರಮಗಳ ವಿವರ ತಿಳಿಸಿ ಸರ್ಕಾರಕ್ಕೆ ದಿನಾಂಕ: 02–11–2011ರಲ್ಲಿ ಪತ್ರ ಬರೆದಿದ್ದು, ಶ್ರೀಮತಿಯವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಹಾಗೂ ಅವರ ಎರಡು ವರ್ಷಗಳ ಪರೀಕ್ಷತಾ ಅವಧಿಯ ಸೇವೆಯನ್ನು ಪೂರೈಸಿಲ್ಲದ ಕಾರಣ ಪರೀಕ್ಷತಾ ಅವಧಿ ಘೋಷಿತವಾಗಿರುವುದಿಲ್ಲವೆಂದು ತಿಳಿಸಿ ಅವರನ್ನು ಸರ್ಕಾರದ ಸೇವೆಯಿಂದ ವಜಾಗೊಳಿಸುವ ಕುರಿತು ಸರ್ಕಾರದ ಆದೇಶ ಕೋರಲಾಯಿತು. ಸರ್ಕಾರದ ದಿನಾಂಕ: 25–01–2012ರ ಪತ್ರದಲ್ಲಿ ಶ್ರೀಮತಿಯವರನ್ನು ಸೇವೆಯಿಂದ ವಜಾಗೊಳಿಸಲು ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಈ ಕೆಳಕಂಡಂತೆ ತಿಳಿಸಿದೆ.

"ಶ್ರೀಮತಿಯವರಿಗೆ ದಿನಾಂಕ: 24–09–2010ರ ನೋಟೀಸು ಹಾಗೂ ದೋಷಾರೋಪಣೆಗಳನ್ನು ಮತ್ತೊಮ್ಮೆ ಜಾರಿ ಮಾಡಲು, ಅದಾದ 15 ದಿನಗಳ ನಂತರ ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸುವುದು, ನೋಟೀಸುಗಳೂ (ಸಮನ್ಸ್‌ಗಳೂ) ಸಹ ನೌಕರರ ಲಾಸ್ಟ್ ನೋನ್ ವಿಳಾಸಕ್ಕೆ ಜಾರಿ ಮಾಡುವುದು. ವಿಚಾರಣಾಧಿಕಾರಿಗಳನ್ನು ನೇಮಿಸುವ ಮುಂಚೆ ನೌಕರರ ಗೈರು ಹಾಜರಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 106–ಎರನ್ವಯ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಅಧಿಕೃತ ಜ್ಞಾಪನ ಹೊರಡಿಸುವುದು. ಅದರ ಪ್ರತಿಯನ್ನು ನೌಕರರ ಲಾಸ್ಟ್ ನೋನ್ ವಿಳಾಸಕ್ಕೆ ಜಾರಿ ಮಾಡುವುದು, ಮೇಲಿನ ಅಧಿಕೃತ ಜ್ಞಾಪನವು ವಿಚಾರಣೆಯಲ್ಲಿ ದಾಖಲೆ ಆಗಿ ಗುರುತಿಸಲ್ಪಡತಕ್ಕದ್ದು, ವಿಚಾರಣೆ ವರದಿ ಬಂದ ನಂತರ ಸಿಸಿಎ ನಿಯಮಗಳನ್ವಯ ಅದರ ಪ್ರತಿಯನ್ನು ನೌಕರರ ವಿಳಾಸಕ್ಕೆ ಕಳುಹಿಸಿ ಅದಾದ ಒಂದು ತಿಂಗಳ ನಂತರ ಒಂದು ಸ್ಟ್ರೀಕಿಂಗ್ ಆರ್ಡರ್ ಹೊರಡಿಸಿ ನೌಕರರನ್ನು ವಜಾ ಮಾಡುವುದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8(VIII)ರನ್ವಯ ಸೇವೆಯಿಂದ ವಜಾಗೊಳಿಸಲು ತಿಳಿಸಲಾಗಿದ್ದು" ಅದರಂತೆ ಈ ಕೆಳಕಂಡಂತೆ ಎಲ್ಲಾ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.

ಶ್ರೀಮತಿಯವರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106–ಎರನ್ವಯ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಆದೇಶವನ್ನು ಹೊರಡಿಸಿ ಅದರ ಪ್ರತಿಯನ್ನು ಈ ಕಚೇರಿಯಲ್ಲಿ ಲಭ್ಯವಿರುವ ಅವರ ಭಾರತದ ವಿಳಾಸಕ್ಕೆ ಹಾಗೂ ವಿದೇಶದ ವಿಳಾಸಕ್ಕೆ ಕಳುಹಿಸಲಾಗಿ ಭಾರತದ ವಿಳಾಸದಲ್ಲಿ ಅವರ ಪರವಾಗಿ ಸ್ವೀಕರಿಸಿದ್ದು, ವಿದೇಶದ ವಿಳಾಸದಲ್ಲಿ ಅವರೇ ಸ್ವೀಕರಿಸಿರುತ್ತಾರೆ.ನಂತರ ವಿಚಾರಣಾಧಿಕಾರಿಗಳನ್ನು ನೇಮಿಸಿ, ವಿಚಾರಣೆ ನೋಟೀಸುಗಳನ್ನು ಅವರ ವಿಳಾಸಕ್ಕೆ ಜಾರಿ ಮಾಡಲಾಗಿದೆ, ವಿಚಾರಣೆ ವರದಿ ಬಂದ ನಂತರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ಗಳನ್ವಯ ಅದರ ಪ್ರತಿಯನ್ನು ಅವರ ವಿಳಾಸಕ್ಕೆ ಕಳುಹಿಸಿ ಅದಾದ ಒಂದು ತಿಂಗಳ ನಂತರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8(VIII)ರನ್ವಯ ಸೇವೆಯಿಂದ ವಜಾಗೊಳಿಸಲು ತಿಳಿಸಲಾಗಿದ್ದು, ಅದರಂತೆ ಕ್ರಮಕೈಗೊಳ್ಳಲಾಯಿತು.

ಸರ್ಕಾರದ ದಿನಾಂಕ: 25–01–2012ರ ಪತ್ರದ ಮೇರೆಗೆ ದಿನಾಂಕ: 24–09–2010ರ ಕಾರಣ ಕೇಳುವ ನೋಟೀಸು ಹಾಗೂ ದೋಷಾರೋಪಣೆಗಳನ್ನು ಶ್ರೀಮತಿಯವರಿಗೆ ಪುನ: ವಿದೇಶದಲ್ಲಿನ ವಿಳಾಸಕ್ಕೆ ಕಳುಹಿಸಲಾಗಿ ಪತ್ರಗಳು ಸ್ವೀಕೃತಗೊಳ್ಳದೆ ಹಿಂದಿರುಗಿ ಬಂದಿರುತ್ತದೆ. ಈ ಕಚೇರಿ ಅಧಿಕೃತ ಜ್ಞಾಪನ ದಿನಾಂಕ: 15–03–2012ರಲ್ಲಿ ಅವರು ಕರ್ತವ್ಯಕ್ಕೆ ಗೈರು ಹಾಜರಾದ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 106–ಎರನ್ವಯ ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಆದೇಶಿಸಿದೆ. ದಿನಾಂಕ: 20–04–2012ರ ಈ ಕಚೇರಿ ಆದೇಶದಲ್ಲಿ ಶ್ರೀಮತಿಯವರನ್ನು ಸೇವೆಯಿಂದ ವಜಾಮಾಡುವ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 106–ಎ, 108ರ ಅಡಿಯಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಹಾಗೂ ಕಾರ್ಯವಿಧಾನ ಅನುಸರಿಸಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎನ್. ಬಿ. ಶಿವರುದ್ರಪ್ಪ, ಜಂಟಿ ನಿಯಂತ್ರಕರು ಹಾಗೂ ಸರ್ಕಾರಿ ಲೆಕ್ಕ ಪರಿಶೋಧಕರು, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಸಿ. ಸುರೇಂದ್ರ ಬಾಬು, ಸಹಾಯಕ ನಿಯಂತ್ರಕರು (ಆಡಳಿತ) ಪ್ರಧಾನ ಕಚೇರಿ, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲಾಯಿತು.

ಮೇಲ್ಕಾಣಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿಯವರ ವಿರುದ್ಧ ವಿಚಾರಣೆ ನಡೆಸಲು ದಿನಾಂಕ: 21–06–2012 ರಂದು ದಿನವನ್ನು ಗೊತ್ತುಪಡಿಸಿ ದಿನಾಂಕ: 06–06–2012ರಂದು ಮಂಡನಾಧಿಕಾರಿಗಳಾದ ಶ್ರೀ ಸಿ. ಸುರೇಂದ್ರ ಬಾಬು, ಸಹಾಯಕ ನಿಯಂತ್ರಕರು (ಆಡಳಿತ) ಇವರಿಗೂ ಮತ್ತು ಆಪಾದಿತ ನೌಕರರಾದ ಶ್ರೀಮತಿ ರೀಮು ಎಸ್ ಪಾಟೀಲರವರ ಭಾರತದ ವಿಳಾಸ ಹಾಗೂ ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೆ ಕಳುಹಿಸಿರುವ ನೋಟೀಸುಗಳಲ್ಲಿ ಭಾರತದ ವಿಳಾಸದಲ್ಲಿ ಆಪಾದಿತ ನೌಕರರ ಪರವಾಗಿ ನೋಟೀಸನ್ನು ಸ್ವೀಕರಿಸಲಾಗಿದೆ. ಆದರೆ ಸ್ವಿಡ್ಜರ್‌ಲ್ಯಾಂಡ್ ವಿಳಾಸದ ನೋಟೀಸಿನ ಬಗ್ಗೆ ಅಂಚೆ ಕಚೇರಿಯಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ. ಪುನ: ದಿನಾಂಕ: 05–07–2012 ಹಾಗೂ ದಿನಾಂಕ: 08–08–2012ರಲ್ಲಿ ನೋಟೀಸುಗಳನ್ನು ಭಾರತದ ವಿಳಾಸಕ್ಕೂ, ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೂ ಕಳುಹಿಸಿದ್ದು, ಭಾರತದ ವಿಳಾಸದ ನೋಟೀಸುಗಳು ಆಪಾದಿತ ನೌಕರರ ಪರವಾಗಿ ಸ್ವೀಕೃತಗೊಂಡು, ಸ್ವಿಡ್ಜರ್‌ಲ್ಯಾಂಡ್ ವಿಳಾಸದ ನೋಟೀಸುಗಳು ಸ್ವೀಕೃತಗೊಳ್ಳದೆ ವಾಪಸ್ಸು ಬಂದಿರುತ್ತದೆ. ಆರೋಪಿತ ನೌಕರರಿಗೆ ಸಾಕಷ್ಟು ಸಮಯಾವಕಾಶ ನೀಡಿದ್ದರೂ ಸಹ ಅವರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಮಂಡನಾಧಿಕಾರಿಗಳು, ವಾದ ಮಂಡಿಸಿರುವಂತೆ ವಿಚಾರಣಾಧಿಕಾರಿಗಳು ಆರೋಪಿತ ನೌಕರರ ಅನುಪಸ್ಥಿತಿಯಲ್ಲಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ದಿನಾಂಕ: 17–09–2012ರಂದು ಸಲ್ಲಿಸಿರುತ್ತಾರೆ. ಶ್ರೀಮತಿಯವರ ವಿರುದ್ಧದ ವಿಚಾರಣಾ ವರದಿಯನ್ನು ಪರಿಶೀಲಿಸಿದಾಗ ಅವರ ಮೇಲೆ ಹೊರಿಸಿರುವ ಅನಧಿಕೃತ ಗೈರು ಹಾಜರಿ ಆಪಾದನೆ ಹಾಗೂ ಆಕ್ಷೇಪಣಾರಹಿತ ಪ್ರಮಾಣಪತ್ರ ಪಡೆಯದೆ ಹೊರ ದೇಶಕ್ಕೆ ಹೋಗುವ ಮೂಲಕ ಎಸಗಿರುವ ಅಶಿಸ್ತಿನ ವರ್ತನೆ ಸಾಬೀತಾಗಿರುವುದು ದೃಢಪಟ್ಟಿರುತ್ತದೆ. ಈ ವಿಚಾರಣಾ ವರದಿಯನ್ನು ಅಂಗೀಕರಿಸಿ ಆರೋಪಿತ ನೌಕರರಿಗೆ ದಿನಾಂಕ: 25–10–2012ರ ಪತ್ರದೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಭಾರತದ ವಿಳಾಸ ಹಾಗೂ ಸ್ವಿಡ್ಜರ್‌ಲ್ಯಾಂಡ್ ವಿಳಾಸಕ್ಕೂ ಕಳುಹಿಸಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 12ರನ್ವಯ ಕಳುಹಿಸಿ ವಿಚಾರಣಾ ವರದಿಯ ಪ್ರತಿ ಸ್ವೀಕರಿಸಿದ 30 ದಿನಗಳೊಳಗೆ ಅಭಿಪ್ರಾಯ ನೀಡುವಂತೆ ಸಮಯಾವಕಾಶ ಕೊಡಲಾಯಿತು. ಆದರೆ ಭಾರತದ ವಿಳಾಸಕ್ಕೆ ಕಳುಹಿಸಲಾದ ಪತ್ರ ಶ್ರೀಮತಿಯವರ ಪರವಾಗಿ ಸ್ವೀಕೃತಗೊಂಡು ಅಂಚೆ ಸ್ವೀಕೃತ ಪತ್ರ ಬಂದಿರುತ್ತದೆ. ಸ್ವಿಡ್ಜರ್‌ಲ್ಯಾಂಡ್ ವಿಳಾಸದ ಪತ್ರ ಸ್ವೀಕೃತಗೊಳ್ಳದೆ ವಾಪಸ್ಸು ಬಂದಿರುತ್ತದೆ.

ಶ್ರೀಮತಿಯವರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಸಹ ಹೊರದೇಶದಿಂದ ರಜೆ ವಿಸ್ತರಣೆಗೆ ಅರ್ಜಿ ಸಲ್ಲಿಸುವ ಹೊರತಾಗಿ ಕರ್ತವ್ಯಕ್ಕೆ ಮರಳಿ ಬರುವ ಸೂಚನೆಗಳು ಕಂಡು ಬಂದಿರುವುದಿಲ್ಲ. ಶ್ರೀಮತಿಯವರು ದಿನಾಂಕ: 20–08–2009ರಿಂದ 27–06–2011ರವರೆಗೆ ಹಾಗೂ ದಿನಾಂಕ: 28–06–2011 ರಿಂದ 29–09–2011ರವರೆಗೆ ಕೋರಿರುವ ಅಸಾಧಾರಣ ರಜೆ ಅವಧಿ ಮುಗಿದಿರುತ್ತದೆ. ಆದರೂ ಸದರಿಯವರು ಕೆಲಸಕ್ಕೆ ಮರಳಿ ಬಂದಿರುವುದಿಲ್ಲಾ. ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 108ರನ್ವಯ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸೇಇನಿ/89 ದಿನಾಂಕ: 31–01–1989ರಲ್ಲಿನ ಸೂಚನೆಗಳನ್ವಯ 4 ತಿಂಗಳು ಅಥವಾ ಹೆಚ್ಚಿನ ಅವಧಿಗೆ ರಜೆ ಮಂಜೂರಾತಿ ಪಡೆದುಕೊಳ್ಳದೆ ಕರ್ತವ್ಯ ವಿಮುಖನಾಗಿ ಗೈರು ಹಾಜರಾಗುವ ಅಧಿಕಾರಿಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ಮತ್ತು ಕರ್ನಾಟಕ ನಾಗರೀಕ ಸೇವಾ (ಪರೀಕ್ಷತಾ) ನಿಯಮಾವಳಿಗಳ ನಿಯಮ 1977ರ ನಿಯಮ 6(1)ರಲ್ಲಿ ನಮೂದಿಸಲಾದ ವಿಧಾನಗಳನ್ನು ಅನುಸರಿಸಿ ಸೇವೆಯಿಂದ ತೆಗೆದುಹಾಕಬಹುದಾಗಿರುತ್ತದೆ. ಸದರಿ ವಿಧಾನಗಳನ್ನು ಅನುಸರಿಸಲಾಗಿದೆ.

ಶ್ರೀಮತಿಯವರ ಪ್ರಕರಣದಲ್ಲಿ ಅವರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಶಿಕ್ಷೆ ವಿಧಿಸಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ರಾಲೆಪ 16 ಸಿದ್ವಿನೇ/2007–12, ದಿನಾಂಕ: 11–02–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ಶ್ರೀಮತಿ ರೀಮು ಎಸ್ ಪಾಟೀಲ, ಕಿರಿಯ ಲೆಕ್ಕ ಸಹಾಯಕರು ಇವರ ಗೈರು ಹಾಜರಿಯಿಂದ ಸರ್ಕಾರಿ ಕೆಲಸಗಳಿಗೆ ಅಡಚಣೆ ಉಂಟಾಗಿರುವುದನ್ನು ಸಹ ಗಮನದಲ್ಲಿಟ್ಟುಕೊಂಡು ಅವರ ವಿರುದ್ಧದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ವರದಿಯಲ್ಲಿ ಅವರು ಸರ್ಕಾರಿ ಸೇವೆಗೆ ದೀರ್ಘಕಾಲದಿಂದ ಅಂದರೆ ದಿನಾಂಕ: 29–11–2008 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು ಮತ್ತು ನಿಯಮಗಳ ಪ್ರಕಾರ ಆಕ್ಷೇಪಣಾ ರಹಿತ ಪ್ರಮಾಣಪತ್ರ ಪಡೆಯದೆ ವಿದೇಶಕ್ಕೆ ಹೋಗಿರುವರೆಂದು ಸಾಬೀತಾಗಿರುವ ಆರೋಪಗಳಿಗನುಗುಣವಾಗಿ ಹಾಗೂ ಶ್ರೀಮತಿಯವರ ಪರೀಕ್ಷತಾ ಅವಧಿ ಘೋಷಿತವಾಗಿಲ್ಲದಿರುವುದರಿಂದ (ಕರ್ನಾಟಕ ನಾಗರೀಕ ಸೇವಾ (ಪರೀಕ್ಷತಾ) ನಿಯಮಾವಳಿಗಳ ನಿಯಮ 1977ರ ನಿಯಮ 6(1)ರನ್ವಯ ಮತ್ತು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ಮತ್ತು ಷೆಡ್ಯೂಲ್ II ರಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ, ಕಿರಿಯ ಲೆಕ್ಕ ಸಹಾಯಕರ ನೇಮಕಾತಿ ಹಾಗೂ ಶಿಸ್ತಿನ ಪ್ರಾಧಿಕಾರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿಕೊಂಡು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (VIII)ರನ್ವಯ ಮತ್ತು ದಿನಾಂಕ: 11–02–2012 ರಿಂದ ಜಾರಿಗೆ ಬರುವಂತೆ ಶ್ರೀಮತಿ ರೀಮು ಎಸ್ ಪಾಟೀಲ, ಕಿರಿಯ ಲೆಕ್ಕ ಸಹಾಯಕರವರನ್ನು ಸರ್ಕಾರಿ ಸೇವೆಯಿಂದ ವಜಾಮಾಡಲಾಗಿದೆ.

**ನಿಯಂತ್ರಕರು ಹಾಗೂ ಕಿರಿಯ ಲೆಕ್ಕ ಸಹಾಯಕರ ನೇಮಕಾತಿ**
**ಮತ್ತು ಶಿಸ್ತಿನ ಪ್ರಾಧಿಕಾರ,**
ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.

## ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ

**ನಿಯಂತ್ರಕರ ಕಛೇರಿ, ರಾಜ್ಯಲೆಕ್ಕಪತ್ರ ಇಲಾಖೆ, ಬೆಂಗಳೂರು ಜಲ ಮಂಡಳಿ ಕಟ್ಟಡ, 6ನೇ ಮಹಡಿ, ಕಾವೇರಿ ಭವನ, ಬೆಂಗಳೂರು-560 009.**

**ತಿದ್ದುಪಡಿ ಆದೇಶ**

**ಸಂಖ್ಯೆ: ರಾಲೆಪ 16 ಸಿದ್ವಿನೇ 2007-2012, ದಿನಾಂಕ: 04-03-2013.**

ರಾಜ್ಯ ಲೆಕ್ಕಪತ್ರ ಇಲಾಖೆಯ ಪ್ರಧಾನ ಕಚೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀಮತಿ ರೀಮು ಎಸ್ ಪಾಟೀಲ, ಕಿರಿಯ ಲೆಕ್ಕ ಸಹಾಯಕರನ್ನು ಈ ಕಚೇರಿ ನಡವಳಿ ಸಂಖ್ಯೆ: ರಾಲೆಪ 16 ಸಿದ್ವಿನೇ 2007-2012 ದಿನಾಂಕ: 11-02-2013ರಲ್ಲಿ ಸರ್ಕಾರದ ಸೇವೆಯಿಂದ ವಜಾಗೊಳಿಸಲಾಗಿದ್ದು, ಸದರಿ ನಡವಳಿಯಲ್ಲಿ ಶ್ರೀಮತಿಯವರನ್ನು ಸರ್ಕಾರದ ಸೇವೆಯಿಂದ ದಿನಾಂಕ: 11-02-2012ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ ಎಂದು ನಮೂದಾಗಿರುವುದನ್ನು **"ಶ್ರೀಮತಿಯವರನ್ನು ದಿನಾಂಕ: 11-02-2013ರಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಮಾಡಲಾಗಿದೆ ಎಂದು"** ಎಂದು ಓದಿಕೊಳ್ಳುವುದು.

**ನಿಯಂತ್ರಕರು**
ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು.

P.R. 2324

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1, ಚಿಕ್ಕಮಗಳೂರು ಜಿಲ್ಲೆ

**ಪ್ರಕಟಣೆ**

**ಸಂಖ್ಯೆ : ಕಾಅಚಿಉವಿ-1/ಕಾಪಕಾ/ಎಫ್-04/2010, ದಿನಾಂಕ : 29-10-2013.**

**ಅರ್ಜಿದಾರರು**

1. ಶ್ರೀ ಅಣ್ಣಪ್ಪ ಬಿನ್ ದಿ : ರಂಗಯ್ಯ, ವಯಸ್ಸು ಸುಮಾರು 49 ವರ್ಷ,
2. ಶ್ರೀಮತಿ ನಾಗಮ್ಮ ಕೋಂ : ಶ್ರೀ ಅಣ್ಣಪ್ಪ, ವಯಸ್ಸು ಸುಮಾರು 38 ವರ್ಷ

ಇಬ್ಬರು ವಾಸ :
ಬಾಗುವಳ್ಳಿ, ಸಿಂಸೆ ಗ್ರಾಮ, ನರಸಿಂಹರಾಜಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

ವಿರುದ್ಧ

**ಪ್ರತಿವಾದಿಗಳು**

1. ಶ್ರೀ ನಾಗರಾಜ ಬಿನ್ ಗೋಪಾಲ ನಾಯ್ಕ, ವಯಸ್ಸು 33 ವರ್ಷ, ಚಾಲಕ, ಟಾಟಾ ಟೆಂಪೋ,
   ವಾಸ : ಕೃಷ್ಣೂರು ಹೊಸಕೆರೆ, ಎನ್.ಆರ್. ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ
2. ಎಂ.ಎಂ. ಜೋಸ್ ಬಿನ್ ಮಥಾಯ್, ವಯಸ್ಸು 52 ವರ್ಷ, ಮಾಲೀಕರು, ಟಾಟಾ 709 ಟೆಂಪೋ,
   ವಾಸ : ಹೊನ್ನೆಕೊಡಿಗೆ, ಹಂತುವಾಣಿ ವೃತ್ತ, ವರ್ಕಾಟೆ ಗ್ರಾಮ, ಎನ್.ಆರ್. ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.
3. ಮೆ: ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎನ್.ಎ. ಕಾಂಪ್ಲೆಕ್ಸ್, 3ನೇ ಅಡ್ಡ ರಸ್ತೆ, ನೆಹರೂ ರಸ್ತೆ, ಶಿವಮೊಗ್ಗ-577 201.

ಅರ್ಜಿದಾರರಾದ ಶ್ರೀ ಅಣ್ಣಪ್ಪ ಬಿನ್ ದಿ. ರಂಗಯ್ಯ ಮತ್ತು ಶ್ರೀಮತಿ ನಾಗಮ್ಮ ಕೋ : ಶ್ರೀ ಅಣ್ಣಪ್ಪ, ಇವರುಗಳು ಜಯಂತ್ ರವರು ದಿನಾಂಕ: 27-02-2010 ರಂದು 2ನೇ ಪ್ರತಿವಾದಿಯ ಆದೇಶದ ಮೇರೆಗೆ ಅವರಿಗೆ ಸೇರಿದ ವಾಹನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಅಪಘಾತವಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿ, ತಾವು ಮೃತರ ಅವಲಂಭಿತರೆಂದು ತಿಳಿಸಿ ಪರಿಹಾರವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಭಿತರು "ಯಾರೂ ಇಲ್ಲ" ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ. ಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ಚಿಕ್ಕಮಗಳೂರು.

P.R. 2381
SC-10

## ಕಂದಾಯ ಸಚಿವಾಲಯ

**ಸಂಖ್ಯೆ: ಆರ್‌ಡಿ 260 ಎಲ್‌ಜಿಬಿ 2012 ಬೆಂಗಳೂರು, ದಿನಾಂಕ: 27.09.2013**

**ಅಧಿಸೂಚನೆ-1**

**ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1)**

**ಹಾಗೂ ಕರ್ನಾಟಕ ಭೂ ಕಂದಾಯ ನಿಯಮ 1966ರ ನಿಯಮ 94ರ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ದೊಮ್ಮಸಂದ್ರ ಗ್ರಾಮದ ಸ.ನಂ. 233ರಲ್ಲಿ 0-13 ಗುಂಟೆ 'ಸರ್ಕಾರಿ ಬಂಜರು' ಜಮೀನನ್ನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ, ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ 68ನೇ ಪ್ರಕರಣದ (1)ನೇ ಉಪ-ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಈ ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೇ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಸಾರ್ವಜನಿಕನು ಅಥವಾ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮೀಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| **ಜಮೀನು ಇರುವ ಗ್ರಾಮ:** | ದೊಮ್ಮಸಂದ್ರ ಗ್ರಾಮ, ಸರ್ಜಾಪುರ ಹೋಬಳಿ |
| **ತಾಲ್ಲೂಕು:** | ಆನೇಕಲ್ ತಾಲ್ಲೂಕು |
| **ಜಿಲ್ಲೆ:** | ಬೆಂಗಳೂರು ನಗರ ಜಿಲ್ಲೆ |
| **ಸರ್ವೆ ನಂಬರ್:** | ಸ.ನಂ. 233ರಲ್ಲಿ 0.13 ಗುಂಟೆ |
| **ಸದರಿ ಜಮೀನಿನ ವರ್ಣನೆ ಹಾಗೂ ಸರಿಸುಮಾರು ವಿಸ್ತೀರ್ಣ:** | 0.13 ಗುಂಟೆ 'ಸರ್ಕಾರಿ ಬಂಜರು' |
| **ಮೇರೆಗಳು:** | ಪೂರ್ವಕ್ಕೆ: ರಸ್ತೆ |
| | ಪಶ್ಚಿಮಕ್ಕೆ: ಸ.ನಂ. 180 |
| | ಉತ್ತರಕ್ಕೆ: ರಸ್ತೆ |
| | ದಕ್ಷಿಣಕ್ಕೆ: ಅ.ರಾ. ವಿದ್ಯಾಸಂಸ್ಥೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ-1)

**PR-32**

**SC-100**

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು-27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ವಿವ/23/2013-14 ದಿನಾಂಕ: 9-12-2013.**

ಕೋಲಾರ ಜಿಲ್ಲೆ, ಕೋಲಾರ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 2-ಅರಾಭಿಕೊತ್ತನೂರು ಕ್ಷೇತ್ರದ ಸದಸ್ಯ ಸ್ಥಾನಕ್ಕೆ ಕೋಲಾರ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29-09-2013ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:1-10-2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14)

ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಕೋಲಾರ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗದಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 2–ಅರಾಭಿಕೊತ್ತನೂರು | ಸಾಮಾನ್ಯ | ಎಂ.ಜಗದೀಶ್(ಗೌಡ) ಬಿನ್ ಮುನಿಯಪ್ಪ, ಅಮ್ಮೇರಹಳ್ಳಿ, ಕೋಲಾರ ತಾಲ್ಲೂಕು. | ಪಕ್ಷೇತರ |

PR-06
SC-100

ಗೌರವ್ ಗುಪ್ತ
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ವಿವ/23/2013–14 ದಿನಾಂಕ: 9–12–2013.**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 12–ಪುಲಗೂರಕೋಟೆ ಕ್ಷೇತ್ರದ ಸದಸ್ಯ ಸ್ಥಾನಕ್ಕೆ ಕೋಲಾರ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29–09–2013ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:1–10–2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಶ್ರೀನಿವಾಸಪುರ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿನಿಗದಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 12–ಪುಲಗೂರಕೋಟೆ | ಸಾಮಾನ್ಯ | ಕೆ.ಕೆ.ಮಂಜುನಾಥ ಬಿನ್ ಕೃಷ್ಣರೆಡಿ, ಕಲ್ಲೂರು ಗ್ರಾಮ ಮತ್ತು ಅಂಚೆ, ಶ್ರೀನಿವಾಸಪುರ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

PR-07
SC-100

ಗೌರವ್ ಗುಪ್ತ
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

## ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ವಿವ/23/2013–14 ದಿನಾಂಕ: 9–12–2013.**

ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 12–ಕಾಕನೂರು ಕ್ಷೇತ್ರದ ಸದಸ್ಯ ಸ್ಥಾನಕ್ಕೆ ದಾವಣಗೆರೆ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29–09–2013ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:1–10–2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು

ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಚನ್ನಗಿರಿ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗದಿ ಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 12–ಕಾಕನೂರು | ಸಾಮಾನ್ಯ | ಎನ್.ಬಿ.ಕೊಟ್ರಬಸಪ್ಪ ಬಿನ್ ಬಸವಪ್ಪ, ದೊಡ್ಡಬ್ಬಿಗೆರೆ, ದೊಡ್ಡಬ್ಬಿಗೆರೆ ಅಂಚೆ, ಚನ್ನಗಿರಿ ತಾಲ್ಲೂಕು | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

PR-08
SC-100

**ಗೌರವ್ ಗುಪ್ತ**
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.**

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ವಿವ/23/2013–14 ದಿನಾಂಕ: 9–12–2013.**

ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 2–ಅರಸಿಕೆರೆ ಕ್ಷೇತ್ರದ ಸದಸ್ಯ ಸ್ಥಾನಕ್ಕೆ ದಾವಣಗೆರೆ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29–09–2013ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:1–10–2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಹರಪನಹಳ್ಳಿ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗದಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 2–ಅರಸಿಕೆರೆ | ಸಾಮಾನ್ಯ | ಎ.ಮಹಬ್ಬುಲ್ಲಾಸಾಬ್ ಅರಸೀಕೆರೆ ಗ್ರಾಮ ಅರಸೀಕೆರೆ ಅಂಚೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

PR-09
SC-100

**ಗೌರವ್ ಗುಪ್ತ**
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.**

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ವಿವ/23/2013–14 ದಿನಾಂಕ: 9–12–2013.**

ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 3–ಬರಗೂರು ಕ್ಷೇತ್ರದ ಸದಸ್ಯ ಸ್ಥಾನಕ್ಕೆ ತುಮಕೂರು ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29–09–2013 ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ: 1–10–2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ

ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಶಿರಾ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗದಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 3–ಬರಗೂರು | ಅನುಸೂಚಿತ ಜಾತಿ | ಕೃಷ್ಣಪ್ಪ ಬಿನ್ ನಿಂಗಪ್ಪ, ಕುರುಬರರಾಮನಹಳ್ಳಿ, ಹುಲಿಕುಂಟೆ ಹೋಬಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

PR-10
SC-100

ಗೌರವ್ ಗುಪ್ತ
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಂಗಳೂರು.**

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27.**

**ಅಧಿಸೂಚನೆ**

**ಸಂಖ್ಯೆ:ಪ್ರಾಆಕ.ಚುನಾವಣೆ.ಏವ/23/2013–14 ದಿನಾಂಕ: 9–12–2013.**

ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 15–ಮಲ್ಲಪ್ಪನಹಳ್ಳಿ ಕ್ಷೇತ್ರದ ಸದಸ್ಯ ಸ್ಥಾನಕ್ಕೆ ಚಿತ್ರದುರ್ಗ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 29–09–2013ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:1–10–2013 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು "ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು "ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ.

**ಹೊಸದುರ್ಗ ತಾಲ್ಲೂಕು ಪಂಚಾಯಿತಿ**

| ಕ್ರ. ಸಂ. | ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗದಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ/ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| 1 | 15–ಮಲ್ಲಪ್ಪನಹಳ್ಳಿ | ಸಾಮಾನ್ಯ | ಹೆಚ್.ಎ.ವಿಶ್ವನಾಥ ಬಿನ್ ಹೆಚ್.ಕೆ.ಆನಂದಪ್ಪ, ಹೆಬ್ಬಳ್ಳಿ, ಹೊಸದುರ್ಗ ತಾಲ್ಲೂಕು. | ಪಕ್ಷೇತರ |

PR-11
SC-100

ಗೌರವ್ ಗುಪ್ತ
ಪ್ರಾದೇಶಿಕ ಆಯುಕ್ತರು, ಬೆಂಗಳೂರು.

## IN THE COURT OF HON'BLE 3RD A.C.M.M. COURT NRUPATHUNGA ROAD, BANGALORE

It's hereby notified to the public, that Byatarayanapura Police Station, Bangalore City have Seized the following vehicle a unclaimed and such vehicles are lying in the Police Station as unclaimed so for. Hence the owner of the vehicles may put their claim six (06) Months from the date of this notification.

**Abhay D. Chougala**
III Addl. Chief Metropoliton Magistrate, Bangalore.

| SL NO. | VIHICLE TYPE | CR NO & SEC | PF NO. | SEIZED DATE | ENGINE NO. | CHASIS NO. |
|---|---|---|---|---|---|---|
| 1 | HERO HONDA NO. KA-51-H-5972 | 191/2011 US 379 IPC | 97/2011 | 1/7/2011 | 06C15M55221 | 06C16C65805 |
| 2 | SCOTTER PRIYA NO. CAH 9474 | 340/2009 US 379 IPC | 106/2009 | 17/7/2009 | NOT CLEAR | NOT CLEAR |
| 3 | TVS SCOOTY NO KA-05-V-8248 | CMISS N. 594/09 | 51/2009 | 8/4/2009 | Y96MM086809 | NOT CLEAR |
| 4 | TVS STAR CITY NO.KA-02-ME-1745 | 340/2009 US 379 IPC | 106/2009 | 17/7/2009 | N8010180 | MD625KF5262K45591 |
| 5 | BAJAJ PULSAR NO. KA-05-EL-6805 | 286/2007 US 379 IPC | 217/2008 | 30/12/2008 | DHGBNJ99794 | MD2DHDHZZMCJ61787 |
| 6 | HERO HONDA NO.KA-05-EN-4999 | 341/2009 US 392 IPC | 123/2009 | 28/8/2009 | 03F21M01435 | 03F21C01472 |
| 7 | HERO HONDA CT-100 NO. KA-05-L-2823 | 340/2009 US 379 IPC | 106/2009 | 17/7/2009 | 94C10E10808 | NOT CLEAR |
| 8 | KINETIC HONDA NO.CKK-8703 | 285/2006 US 379 IPC | 77/2006 | 18/7/2006 | 830974HA | NOT CLEAR |
| 9 | SCOOTER NO. CKH-3335 | 265/2006 US 379 IPC | 77/2006 | 18/7/2006 | NOT CLEAR | NOT CLEAR |
| 10 | KINETIC HONDA NO. KA-09-K-257 | c-miss no. 343/2008 | 30/2008 | 22/2/2008 | 442812HH | NOT CLEAR |
| 11 | HERO HONDA NO. KA-04-EL-422 | 32/2010 US 379 IPC | 13/2010 | 5/2/2010 | 05C08M62340 | 05C09C60817 |
| 12 | KINETIC NOVA NO. KA-05-EP-9262 | 319/2011 US 379 IPC | 170/2011 | 4/10/2011 | E-VF052505 | NOT CLEAR |
| 13 | BAJAJ DISCOVER NO. KA-11-E-8427 | 24/2009 US 379 IPC | 149/2011 | 3/9/2011 | DSGBWB60063 | MD2DSDSZZWCB82171 |
| 14 | T.V.S VICTOR NO. KA-02-EQ-6878 | 319/2011 US 379 IPC | 169/2011 | 4/10/2011 | 0F1C51374561 | MD25AF1251C01394 |
| 15 | HONA DIO NO. KA-02-HB-7668 | 32/2010 US 379 IPC | .11/2010 | 5/2/2010 | JF11E6014137 | NOT CLEAR |
| 16 | BAJAJ DISCOVER NO. KA-02-U-4796 | 257/2010 US 379 IPC | 113/2010 | 14-08-201 | DSGBNC94668 | MD2DSDSZZWCC15990 |
| 17 | HERO HONDA NO. KA-41-K-2124 | 74/2010 US 379 IPC | 43/2010 | 12/3/2010 | 03M15M19865 | 03M16C14965 |
| 18 | HERO HONDA NO. KA-05-ES-7207 | 85/2011 US 379 IPC | 127/2011 | 31/7/2011 | 05B15L01178 | 05B16F01225 |
| 19 | T.V.S SUPERR NO. KA-02-U-7845 | 257/2010 US 379 IPC | 115/2010 | 14/8/2010 | NOT CLEAR | NOT CLEAR |
| 20 | BAJAJ CT-100 NO. KA-05-EW-2156 | 75/2009 | 47/2010 | 19/3/2010 | NOT CLEAR | NOT CLEAR |
| 21 | SUZUKI HIT NO.KA-05-EZ-8626 | 191/2011 US 379 IPC | 100/2011 | 1/7/2011 | NOT CLEAR | NOT CLEAR |
| 22 | BAJAJ DISCOVER NO. NOT | 85/2011 US 379 IPC | 124/2011 | 29/7/2011 | 53441 | 44954 |
| 23 | SUZUKI SAMURAI NO. KA-07-E-8760 | 191/2011 US 379 IPC | 95/2011 | 1/7/2011 | NOT CLEAR | NOT CLEAR |
| 24 | BAJAJ DISCOVER NO.KA-52-E-7100 | 191/2011 US 379 IPC | 98/2011 | 1/7/2011 | NOT CLEAR | NOT CLEAR |
| 25 | TVS VICTOR NO. KA-05-EV-1795 | 74/2010 US 379 IPC | 43/2010 | 12/3/2010 | NOT CLEAR | NOT CLEAR |

| SL NO. | VIHICLE TYPE | CR NO & SEC | PF NO. | SEIZED DATE | ENGINE NO. | CHASIS NO. |
|---|---|---|---|---|---|---|
| 26 | HERO HONDA SPLENDER KA-05-EL-4610 | 85/2011 US 379 IPC | 126/2011 | 30/7/2011 | NOT CLEAR | NOT CLEAR |
| 27 | HERO HONDA SPLENDER KA-09-L-9265 | 67/2013 US 379 IPC | 39/2013 | 25/2/2013 | 96F17E01118 | 96F19F01073 |
| 28 | HERO HONDA SPLENDER NO. KA-42-E-3486. | 541/2008 US 379 IPC | .10/2011 | 14/1/2011 | 05K15E28516 | 05L16F24006 |
| 29 | YAMAHA NO. KA-01-EC-4275 | 78/2012 US 379 IPC | 135/2012 | 4/8/2012 | NOT CLEAR | NOT CLEAR |
| 30 | YAMAHA NO. KA-04-L-6725 | 140/2013 US 399-402 IPC | 52/2013 | 26/3/2013 | NOT CLEAR | NOT CLEAR |
| 31 | HONDA ACTIVA NO. KA-01-EB-5547 | 191/2011 US 379 IPC | 95/2011 | 1/7/2011 | JF018E8413185 | ME4JF082E68234381 |
| 32 | YAMAHA NO. KA-03-ME-5407 | 402/2008 US 399-402 IPC | 138/08 | 22/9/2008 | JL5280122 | 99L1L526012 |
| 33 | BAJAJ DISCOVER NO. KA-04-H-8922 | 257/2010 US 379 IPC | 116/2010 | 14/8/2010 | NGBPM80105 | MD2DSJWZZPCM68065 |
| 34 | SUZUKI NO. KA-02-EX-559 | C-MISS NO. 309/2008 | 24/2008 | 17/2/2008 | 7011M830278 | 7011F777373 |
| 35 | HERO HONDA SPLENDER NO. KA-04-EQ-8651 | 32/2010 US 379 IPC | .12/2010 | 5/2/2010 | 01G18E2140 | 01620F21229 |
| 36 | TVS NO. KA-02-ER-9616 | 237/2013 US 379 IPC | 87/2013 | 10/6/2013 | 0F1F51419014 | MDB25AF1352F43186 |
| 37 | HERO HONDA SPLENDER + NO. KA-05-ET-3599 | 85/2011 US 379 IPC | 126/2011 | 30/7/2011 | 04E15E37555 | 04N16F39459 |
| 38 | HONDA ACTIVA NO.KA-41-J-7331 | 462/2008 US 379 IPC | 45/2010 | 17/3/2010 | NOT KNOWN | NOT KNOWN |
| 39 | HERO HONDA NO.KA-11-Q-5617 | 85/2011 US 379 IPC | 125/2011 | 30.07.2011 | NOT CLEAR | ME4JC36CLB834628 |
| 40 | HONDA DIO SCOOTER NO. KA-02-U-8055 | 149/2012 US 379 IPC | 202/2012 | 29/12/2012 | JF11E4069234 | ME4JF118KA8069459 |
| 41 | TVS XL SUPER NO. KA-02-EX-8592 | 85/2011 US 379 IPC | 129/2011 | 31/7/2011 | 31110M483373 | P110F489782 |
| 42 | BAJAJ PULSAR NO. KA-04-E-686 | 78/2012 US 379 IPC | 141/2012 | 6/8/2012 | GT0BSM5J | MD2DDHDHZZSCM63721 |
| 43 | BAJAJ DISCOVER KA-02-EU-6657 | 74/2010 US 379 IPC | 43/2010 | 12/3/2010 | DSGBML33086 | SMD2DSDSZZMCL57065 |
| 44 | BAJAJ CT-100 NO.KA-09-EF-1414 | 231/2011 US 392 IPC | 108/2012 | 10/7/2012 | DUMBF47500 | DUFDMF47338 |
| 45 | HERO HONDA SPLENDER NO. KA-13-J-1870 | 28/2009 US 379 IPC | 132/2009 | 11/9/2009 | 98M17E10784 | 9919F00898 |
| 46 | BAJAJ DISCOVER NO. KA-02-HB-3954 | NCR NO.664/2013 | 99/2013 | 28/6/2013 | JNGBPK15231 | M020SJNZZPCK12587 |
| 47 | BAJAJ PULSAR NO. KA-03-E-6025 | 506/2008 US 392 IPC | 160/2009 | 19/11/2009 | DHGBNL50120 | MD2DHDHZZWCL12055 |
| 48 | TVS EXCEL SUPER NO. KA-01-EQ-187 | C-MISS NO.337/2008 | 99/2008 | 21/2/2008 | MD621BD1662H92281 | NOT CLEAR |
| 49 | BAJAJ CHETAK NO. KA-02-V-2276 | 114/2007 US 392 IPC | 124/2007 | 15.12.2007 | NOT CLEAR | NOT CLEAR |
| 50 | BAJAJ DISCOVER NO. KA-41-K-581 | 231/2011 US 392 IPC | 127/2012 | 24/7/2012 | JNGBR26621 | MD205AN77RGB06010 |
| 51 | SUZUKI SAMURAI NO. KA-05-EG-2397 | 303/2011 US 457,380 IPC | 225/2011 | 19/12/2011 | 7107M042511 | 7107F987855 |
| 52 | BAJAJ PULSAR NO. KA-05-ER-7762 | 319/11 US 379 IPC | 168/2011 | 4/10/2011 | DHGELA55943 | DHVBLA56519 |
| 53 | HONDA DIO NO. KA-04-MH-5656 | 319/2011 US 379 IPC | 170/2011 | 4/10/2011 | JF11E424012899 | ME4JF118BA8012843 |
| 54 | HERO HONDA SUPER SPLENDER NO. KA-04-ES-6051 | 319/2011 US 379 IPC | 169/2011 | 4/10/2011 | 06GACE08610 | 06GACF08750 |
| 55 | HERO HONDA SPLENDOR NO. KA-05-E-9098 | 85/2011 US 379 IPC | 121/2011 | 29/7/2011 | HA10EA89F38835 | MBLHA10EE89F29968 |

